KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಮಾರ್ಚ್ ೩೦, ೨೦೦೬ (ಚೈತ್ರ ೯, ಶಕವರ್ಷ ೧೯೨೮) | ಸಂಚಿಕೆ ೧೩ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

### ಜಿಲ್ಲಾ ಪೊಲೀಸ್ ಅಧೀಕ್ಷಕರವರ ಕಛೇರಿ, ಹಾಸನ ಜಿಲ್ಲೆ, ಹಾಸನ

### ಅಧಿಸೂಚನೆ

**ಸಂಖ್ಯೆ:ಪಿಎಂಟಿ: 110/ 2002-03, ದಿನಾಂಕ:3ನೇ ಜನವರಿ, 2006**

**ವಿಷಯ:** ಹಾಸನ ಜಿಲ್ಲಾ ಪೊಲೀಸ್ ಇಲಾಖೆಯ ಅನುಪಯುಕ್ತ ಬಿಡಿಭಾಗಗಳು ಟೈರು, ಟ್ಯೂಬು, ಬ್ಯಾಟರಿಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** ಐಜಿಪಿ ದಕ್ಷಿಣ ವಲಯ, ಮೈಸೂರು ರವರ ಪತ್ರ ಸಂಖ್ಯೆ ಲೆಕ್ಕ 2 ಪಿಎಂಟಿ/ 196/ 05-06, ದಿನಾಂಕ: 18.01.2006.

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತಿಳಿಯಪಡಿಸುವುದೇನೆಂದರೆ, ದಿನಾಂಕ: 20.04.2006ರಂದು ಬೆಳಿಗ್ಗೆ 11.00 ಗಂಟೆಗೆ ಸರಿಯಾಗಿ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕೇಂದ್ರಸ್ಥಾನ ಹೊಸಲೈನ್ ರಸ್ತೆ, ಹಾಸನದಲ್ಲಿ, ಹಾಸನ ಜಿಲ್ಲಾ ಪೊಲೀಸ್ ಇಲಾಖೆಯ ಈ ಕೆಳಕಂಡ ಅನುಪಯುಕ್ತ ಬಿಡಿಭಾಗಗಳು ಟೈರು, ಟ್ಯೂಬು, ಬ್ಯಾಟರಿಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿಗೊಳಿಸಲಾಗುವುದು. ಸದರಿ ಅನುಪಯುಕ್ತ ವಸ್ತುಗಳನ್ನು ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕೇಂದ್ರಸ್ಥಾನ ಹೊಸಲೈನ್‌ರಸ್ತೆಯಲ್ಲಿ ಹಾಸನದ ಕಛೇರಿಯ ವೇಳೆಯಲ್ಲಿ ನೋಡಲು ಅವಕಾಶವಿರುತ್ತದೆ. ಸದರಿ ವಸ್ತುಗಳ ವಿವರಗಳನ್ನು ಈ ಕೆಳಗೆ ನಮೂದಿಸಲಾಗಿದೆ.

| ಕ್ರ. ಸಂ. | ವಿವರಣೆ | ಅನುಪಯುಕ್ತ ವಸ್ತುಗಳು | |
|---|---|---|---|
| | | 2003-04 | 2004-05 |
| 1. | ನಿರುಪಯುಕ್ತ ಬಿಡಿಭಾಗಗಳು | ಸಂ.1 ರಿಂದ 724 | 1 ರಿಂದ 161 |
| 2. | ಟೈರು ಮತ್ತು ಟ್ಯೂಬು, ಫ್ಲಾಫ್ಸ್ | ಸ.ನಂ.97 | ಸಂ.77 |
| 3. | ಬ್ಯಾಟರಿಗಳು | ಸಂ.41 | ಸಂ.22 |

**ಹರಾಜಿನ ಷರತ್ತುಗಳು ಮತ್ತು ನಿಬಂಧನೆಗಳು**

1. ನಿರುಪಯುಕ್ತ ಬಿಡಿಭಾಗಗಳು, ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕೇಂದ್ರಸ್ಥಾನ, ಹೊಸಲೈನ್ ರಸ್ತೆಯಲ್ಲಿ ಹಾಲಿ ಯಾವ ಸ್ಥಿತಿಯಲ್ಲಿ ಇದೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು.
2. ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಪ್ರತಿಯೊಬ್ಬರು ರೂ.1,000-00 ಠೇವಣಿಯನ್ನು ಹರಾಜಿಗೆ ಮುನ್ನ ನಗದಾಗಿ ಪಾವತಿಸತಕ್ಕದ್ದು. ಠೇವಣಿ ಪಾವತಿಸದೆ ಹರಾಜಿನಲ್ಲಿ ಭಾಗವಹಿಸುವಂತಿಲ್ಲ.
3. ಈ ನಿರುಪಯುಕ್ತ ವಸ್ತುಗಳ ಖರೀದಿಗೆ ಟೆಂಡರ್‌ಗಳನ್ನು ಸಲ್ಲಿಸಬಯಸುವ ಆಸಕ್ತ ಸಾರ್ವಜನಿಕರು ರೂ.1,000 (ಒಂದು ಸಾವಿರ ರೂಪಾಯಿಗಳು) ಗಳ ಠೇವಣಿ ಹಣವನ್ನು "ಪೊಲೀಸ್ ಸೂಪರಿಂಟೆಂಡೆಂಟ್" "ಹಾಸನ ಜಿಲ್ಲೆ", ಇವರ ನಗದು ಶಾಖೆಯಲ್ಲಿ ನಗದು ತುಂಬಿ ನಿರುಪಯುಕ್ತ ವಾಹನ ಟೈರು, ಟ್ಯೂಬ್, ಬಿಡಿಭಾಗಗಳ ಖರೀದಿಗಾಗಿ ಎಂದು ಸ್ಪಷ್ಟವಾಗಿ ನಮೂದಿಸಿದ ಪಟ್ಟಿ ಮಾಡಲಾದ ಟೆಂಡರ್‌ಗಳನ್ನು ದಿನಾಂಕ: 20.04.2006ರ ಸಂಜೆ 4.00 ಗಂಟೆಯ ಒಳಗಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸಬೇಕು (ಟೆಂಡರ್ ಫಾರಂ ನಮೂನೆಯಲ್ಲಿ ಈ ಅಧಿಸೂಚನೆಯ ಕೊನೆಯಲ್ಲಿ ಕೊಡಲಾಗಿದೆ)

4. ಟೆಂಡರ್ ಫಾರಂನಲ್ಲಿ ಬಿಡ್ ಮೊತ್ತವನ್ನು ಅಂಕಿ ಮತ್ತು ಅಕ್ಷರದಲ್ಲಿ ಎರಡರಲ್ಲಿಯೂ ಸ್ಪಷ್ಟವಾಗಿ ನಮೂದಿಸಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ, ಟೆಂಡರ್‌ದಾರರು ತಮ್ಮ ಪೂರ್ಣ ಸಹಿ ಮಾಡಿ ತಿದ್ದುಪಡಿಯನ್ನು ದೃಢೀಕರಿಸಬೇಕು. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
5. ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆ ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಗಳನ್ನು ಪೊಲೀಸ್ ಸೂಪರಿಂಟೆಂಡೆಂಟ್, ಹಾಸನ ಜಿಲ್ಲೆ ರವರಿಗಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯವರಿಗಾಗಲೀ ಸಾರ್ವಜನಿಕರ ಸಮ್ಮುಖದಲ್ಲಿ ಕರೆದು ಬಹಿರಂಗಪಡಿಸುವುದು. ಹರಾಜಿನಲ್ಲಿ ದಾಖಲಾದ ಅತಿ ಹೆಚ್ಚಿನ ಬೆಲೆ ಅಥವಾ ಟೆಂಡರ್‌ನಲ್ಲಿ ದಾಖಲಿಸಿದ ಅತೀ ಹೆಚ್ಚಿನ ಬೆಲೆ ಇವೆರಡರಲ್ಲಿ ಅತೀ ಹೆಚ್ಚಿನ ದರ ದಾಖಲಿಸಿದವರನ್ನು ಯಶಸ್ವಿ ಟೆಂಡರ್ ಬಿಡ್‌ದಾರರೆಂದು ಪರಿಗಣಿಸಲಾಗುವುದು
6. ಯಶಸ್ವಿಯಾದ ಟೆಂಡರ್: ಬಿಡ್‌ದಾರರು ಅಂಗೀಕೃತ ಹೆಚ್ಚಿನ ಬೆಲೆಯ ಶೇ.25 ರಷ್ಟು (ಠೇವಣಿ ಬಿಟ್ಟು) ಹಣವನ್ನು ಹರಾಜಿನ ಸ್ಥಳದಲ್ಲಿ ಅದೇ ದಿನವೇ ತುಂಬತಕ್ಕದ್ದು. ಈ ಹಣಕ್ಕೆ ಯಾವುದೇ ಬಡ್ಡಿಯನ್ನು ನೀಡಲಾಗದು. ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ಇವರಿಂದ ವಿಲೇವಾರಿ ಒಪ್ಪಿಗೆ ಬಂದ ನಂತರವೇ ಉಳಿದ ಭಾಗವನ್ನು ಬಿಡ್‌ದಾರರಿಂದ ಕಟ್ಟಿಸಿಕೊಂಡು ಬಿಡಿಭಾಗಗಳನ್ನು ವಹಿಸಿಕೊಡಲಾಗುವುದು.
ಈ ಬಿಡಿಭಾಗಗಳನ್ನು ಯಶಸ್ವಿ ಬಿಡ್‌ದಾರರು ತಮ್ಮ ಸ್ವಂತ ಖರ್ಚಿನಲ್ಲಿ ತೆಗೆದುಕೊಂಡು ಹೋಗುವುದು. ತಪ್ಪಿದ್ದಲ್ಲಿ ಅವರು ತುಂಬಿದ 25ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆಯನ್ನು ಹೊರಡಿಸಿ ಬಿಡಿಭಾಗಗಳನ್ನು ಹರಾಜು ಮಾಡಲಾಗುವುದು.
7. ಯಶಸ್ವಿ ಬಿಡ್‌ದಾರರು ಎಲ್ಲಾ ಹಣವನ್ನು ಪೊಲೀಸ್ ಅಧೀಕ್ಷಕರ ಕಛೇರಿ, ಹಾಸನ ಜಿಲ್ಲೆಯ ನಗದು ಶಾಖೆಯಲ್ಲಿ ನಗದಾಗಿ ತುಂಬುವುದು. ನಿರುಪಯುಕ್ತ ಬಿಡಿಭಾಗಗಳಿಗೆ ಮಾರಾಟ ತೆರಿಗೆಯನ್ನು ಯಶಸ್ವಿ ಬಿಡ್‌ದಾರರಿಂದ ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರ ವಸೂಲಿ ಮಾಡಲಾಗುವುದು.
8. ಹರಾಜಿನಲ್ಲಿ ಭಾಗವಹಿಸುವ ಸಾರ್ವಜನಿಕರು ಇಲಾಖಾ ನಿಯಮಗಳಿಗೆ ಬದ್ಧರಾಗಿರುತ್ತಾರೆ.
9. ಹರಾಜಿನಲ್ಲಿ ಯಾವುದೇ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದು ಮಾಡುವ ಇಲ್ಲವೇ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಹಾಸನ ರವರು ಹೊಂದಿರುತ್ತಾರೆ ಹಾಗೂ ಅವರ ತೀರ್ಮಾನವೇ ಅಂತಿಮವಾದುದು.
10. ಬಹಿರಂಗ ಹರಾಜಿನ ವಿಷಯದಲ್ಲಿ ಯಾವುದೇ ವಾದ ವಿವಾದ ಉಂಟಾದಲ್ಲಿ ಪೊಲೀಸ್ ಅಧೀಕ್ಷಕರು, ಹಾಸನ ರವರು ಮಾಡುವ ನಿರ್ಣಯವೇ ಅಂತಿಮವಾಗಿರುತ್ತದೆ.
11. ಹರಾಜಿನಲ್ಲಿ ಯಶಸ್ವಿಯಾಗದೇ ಇರುವಂತಹ ಸವಾಲುದಾರರ ಠೇವಣಿಯನ್ನು ಹರಾಜು ಮುಗಿದ ನಂತರ ತಕ್ಷಣ ಅವರಿಗೆ ಹಿಂತಿರುಗಿಸಲಾಗುವುದು.
12. ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವವರು ನಿರುಪಯುಕ್ತ ವಸ್ತುಗಳನ್ನು ಕಛೇರಿಯ ವೇಳೆಯಲ್ಲಿ ಡಿಎಆರ್ ಹಾಸನ ಇಲ್ಲಿ ವೀಕ್ಷಿಸಬಹುದು.
13. ಭರ್ತಿ ಮಾಡಿದ ಟೆಂಡರ್ ಫಾರಂಗಳಲ್ಲಿ ಟೆಂಡರ್‌ದಾರರು ತಮ್ಮ ಸಂಪೂರ್ಣ ವಿಳಾಸವನ್ನು ಸ್ಪಷ್ಟವಾಗಿ ನಮೂದಿಸುವುದು.

**ಟೆಂಡರ್ ಫಾರಂನ ನಮೂನೆ**

**ಪೊಲೀಸ್ ವಾಹನಗಳ ನಿರುಪಯುಕ್ತ ಬಿಡಿಭಾಗಗಳು: ಟೈರು, ಟ್ಯೂಬ್, ಬ್ಯಾಟರಿಗಳಿಗಾಗಿ ಟೆಂಡರ್**

ಗೆ,

ಪೊಲೀಸ್ ಅಧೀಕ್ಷಕರು,
ಹಾಸನ ಜಿಲ್ಲೆ, ಹಾಸನ.

ಮಾನ್ಯರೆ,

ತಮ್ಮ ಕಛೇರಿಯ ಟೆಂಡರ್ ಪ್ರಕಟಣೆ ನಂ.ಲೆಕ್ಕ (1) ಪಿಎಂಟಿ 110/ 02-03 ದಿನಾಂಕ....... ರಲ್ಲಿ ತಿಳಿಸಿರುವ ಸಾಲಿನ ನಿರುಪಯುಕ್ತವಾದ ಬಿಡಿಭಾಗಗಳು: ಟೈರು, ಟ್ಯೂಬ್, ಬ್ಯಾಟರಿಗಳು ರೂ.......... ಗಳಿಗೆ ಖರೀದಿಸಲು ಇಚ್ಛಿಸಿರುತ್ತೇನೆ.

ತಮ್ಮ ವಿಶ್ವಾಸಿ,
ಬಿಡ್‌ದಾರರ ಸಹಿ ಮತ್ತು ವಿಳಾಸ.

ದಿನಾಂಕ:
ಸ್ಥಳ:

ಪೊಲೀಸ್ ಅಧೀಕ್ಷಕರು,
ಹಾಸನ ಜಿಲ್ಲೆ, ಹಾಸನ.

ಪಿ.ಆರ್.159

**ತೋಟಗಾರಿಕೆ ಇಲಾಖೆ**

**ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ (ರಾಜ್ಯವಲಯ), ಕೋಲಾರ**

**ಗೋಡಂಬಿ ಫಸಲಿನ ವಿಲೇವಾರಿಗೆ ಟೆಂಡರ್-ಯಾ-ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ:ತೋಇ: ಹಿಸತೋನಿ: ರಾವ: ಕೋ:ಸತೋಅ: 85:2005-06, ದಿನಾಂಕ:6ನೇ ಮಾರ್ಚ್, 2006**

ಈ ಮೂಲಕ ಸಾರ್ವಜನಿಕರಿಗೆ ಆಸಕ್ತ ಹಣ್ಣು ವ್ಯಾಪಾರಸ್ಥರಿಗೆ ತಿಳಿಯಪಡಿಸುವುದೇನೆಂದರೆ ಈ ಕಛೇರಿ ವ್ಯಾಪ್ತಿಯಲ್ಲಿ ಬರುವ ಗೋಡಂಬಿ ಕ್ಷೇತ್ರಗಳ 2006ನೇ ಸಾಲಿನ ದಿನಾಂಕ: 01.01.2006ರಿಂದ ದಿನಾಂಕ: 31.08.2006ರವರೆಗಿನ ಗೋಡಂಬಿ ಫಸಲಿನ ಟೆಂಡರ್-ಯಾ-ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಟೆಂಡರ್-ಯಾ-ಬಹಿರಂಗ ಹರಾಜು ನಡೆಸುವ ದಿನಾಂಕ ಮತ್ತು ವೇಳೆಯನ್ನು ಈ ಕೆಳಕಂಡಂತೆ ನಿಗದಿಪಡಿಸಿದೆ.

| ಕ್ರ. ಸಂ. | ಕ್ಷೇತ್ರದ ಹೆಸರು | ಫಸಲಿನ ಹೆಸರು | ಮರಗಳ ಸಂಖ್ಯೆ | ಹರಾಜು ನಡೆಸುವ ವಿಧಾನ | ಮುಂಗಡ ಠೇವಣಿ ಮೊತ್ತ | ಟೆಂಡರ್ ಹರಾಜು ನಡೆಸುವ ಸ್ಥಳ ದಿನಾಂಕ ಮತ್ತು ಸಮಯ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಚಿಕ್ಕದಾಸರಹಳ್ಳಿ, ಗೋಡಂಬಿಕ್ಷೇತ್ರ, ಶಿಡ್ಲಘಟ್ಟ. | ಗೋಡಂಬಿ | 22000 | ಟೆಂಡರ್ ಮಾತ್ರ | 10000 | ದಿನಾಂಕ: 05.04.2006 ಸಮಯ 3.30 ಸ್ಥಳ: ಹಿಸತೋನಿ (ರಾವ) ಕೋಲಾರ. |

| 1 | 2 | 3 | 4 | 5 | 6 | 7 |
|---|---|---|---|---|---|---|
| 2. | ಹೊಗಳಗೆರೆ ಕ್ಷೇತ್ರ ಶ್ರೀನಿವಾಸಪುರ ತಾಲ್ಲೂಕು. | ಗೋಡಂಬಿ | 1240 | ಟೆಂಡರ್-ಕಂ-ಬಹಿರಂಗ ಹರಾಜು | 500 | ದಿನಾಂಕ: 10.04.2006 ಸಮಯ 12.30 ಸ್ಥಳ: ಹೊಗಳಗೆರೆಕ್ಷೇತ್ರ, ಶ್ರೀನಿವಾಸಪುರ ತಾಲ್ಲೂಕು. |
| 3. | ಜೋಡಿವಮ್ಮ ಸಂದ್ರ ಕ್ಷೇತ್ರ ಮುಳಬಾಗಿಲು ತಾಲ್ಲೂಕು. | ಗೋಡಂಬಿ | 220 | ಟೆಂಡರ್-ಕಂ-ಬಹಿರಂಗ ಹರಾಜು | 500 | ದಿನಾಂಕ: 12.04.2006 ಸಮಯ: 12.30 ಸ್ಥಳ: ಜಿ.ವಿ ಕ್ಷೇತ್ರ, ಮುಳಬಾಗಿಲು ತಾಲ್ಲೂಕು. |
| 4. | ಪಸಪಲೋಡು ಕ್ಷೇತ್ರ, ಗುಡಿಬಂಡೆ, ತಾಲ್ಲೂಕು. | ಗೋಡಂಬಿ | 1122 | ಟೆಂಡರ್-ಕಂ-ಬಹಿರಂಗ ಹರಾಜು | 500 | ದಿನಾಂಕ: 17.04.2006 ಸಮಯ: 12.30 ಸ್ಥಳ: ಪಸಲೋಡು ಕ್ಷೇತ್ರ, ಗುಡಿಬಂಡೆ ತಾಲ್ಲೂಕು. |

ಈ ಮೇಲ್ಕಂಡ ಗೋಡಂಬಿ ಫಸಲಿನ ಬಗ್ಗೆ ಟೆಂಡರ್ ಸಲ್ಲಿಸಲು ಇಚ್ಛಿಸುವವರು ನಿಗದಿತ ಟೆಂಡರ್ ಅರ್ಜಿಯನ್ನು ರೂ.25-00 ರೂ.ಗಳು ಪಾವತಿಸಿ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾವ) ಕೋಲಾರ ರವರ ಕಛೇರಿಯಲ್ಲಿ ಪಡೆಯಬಹುದು (ಸರ್ಕಾರಿ ರಜಾ ದಿನಗಳನ್ನು ಹೊರತುಪಡಿಸಿ) ಟೆಂಡರ್ ಅರ್ಜಿಯನ್ನು ಸಲ್ಲಿಸುವವರು ಠೇವಣಿ ಮೊತ್ತ ಮತ್ತು ಫಸಲಿಗೆ ತಾವು ನಮೂದಿಸುವ ಮೊತ್ತದ ಶೇ.50ರ ಭಾಗದ ಮೊತ್ತವನ್ನು ಕ್ರಾಸ್ ಮಾಡಿದ ಡಿಡಿ ರೂಪದಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾವ) ಕೋಲಾರ ರವರ ಹೆಸರಿನಲ್ಲಿ ಪಡೆದು ಮೊಹರಾದ ಟೆಂಡರ್ ಜೊತೆಯಲ್ಲಿ ಕಡ್ಡಾಯವಾಗಿ ಲಗತ್ತಿಸಬೇಕು. ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ಕಾಲಂ ಸಂಖ್ಯೆ (6)ರಲ್ಲಿ ನಮೂದಿಸಿರುವ ಮೊತ್ತವನ್ನು ಠೇವಣಿ ಮಾಡಿ, ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು.

**ಟೆಂಡರ್ ಸಲ್ಲಿಸುವವರು ಪೂರ್ತಿ ತುಂಬಿದ ಅರ್ಜಿಯನ್ನು ಮೊಹರಾದ ಕವರಿನಲ್ಲಿ ಟೆಂಡರ್ ನಡೆಯುವ ದಿನದಂದು 3.00 ಗಂಟೆ ಸಮಯದೊಳಗಾಗಿ ಅಥವಾ ಮುಂಚಿತವಾಗಿ ಈ ಕೆಳಸಹಿದಾರರ ಕಛೇರಿಯಲ್ಲಿ ಸಲ್ಲಿಸಬೇಕು**

ಮೇಲಿನ ಕ್ಷೇತ್ರದ ಫಸಲಿನ ಟೆಂಡರ್ ಅನುಮೋದನೆಯಾದ ದಿನಾಂಕದಿಂದ 10 ದಿವಸಗಳೊಳಗಾಗಿ ಪೂರ್ಣ ಮೊತ್ತವನ್ನು ಪಾವತಿಸಿ, ಫಸಲನ್ನು ರೂಢಿಸಿಕೊಳ್ಳಬಹುದಾಗಿರುತ್ತದೆ. ಸದರಿ ಟೆಂಡರ್ ಪ್ರಕ್ರಿಯೆಯನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು ಪಡೆದಿರುತ್ತಾರೆ. ಇಲಾಖೆಯ ಅಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ. ಹೆಚ್ಚಿನ ವಿವರಗಳನ್ನು ಈ ಕೆಳಸಹಿದಾರರ ಕಛೇರಿಯಲ್ಲಿ ಅಥವಾ ಸಂಬಂಧಪಟ್ಟ ಕ್ಷೇತ್ರಗಳ ಅಧಿಕಾರಿಗಳಲ್ಲಿ, ಕಛೇರಿ ವೇಳೆಯಲ್ಲಿ ಪಡೆಯಬಹುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
(ರಾಜ್ಯವಲಯ) ಕೋಲಾರ.

ಪಿ.ಆರ್.160

## ಲೋಕೋಪಯೋಗಿ ಇಲಾಖೆ
## ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ
## ಅಲ್ಪಾವಧಿ ಟೆಂಡರ್ ಪ್ರಕಟಣೆ
## (ಎರಡು ಲಕೋಟೆ ಪದ್ಧತಿಯಲ್ಲಿ)

**ನಂ. ಇಎನ್‌ಹೆಚ್/ ಚಿ/ ಸ.ಇ1/ ಟೆಂ.ಪ್ರ./ ಐ.ಆರ್.ಕ್ಯೂ.ಪಿ/ 2005-06/ 4898, ದಿನಾಂಕ:13ನೇ ಮಾರ್ಚ್, 2006**

ಮೊಹರಾದ ಐಟಂವಾರು ದರದ ಟೆಂಡರುಗಳನ್ನು ಕೆಳಗೆ ಕಾಣಿಸಿದ ಕೆಲಸಕ್ಕೆ ಎರಡು ಲಕೋಟೆ ಪದ್ಧತಿಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದಂತೆ ದ್ವಿಪ್ರತಿಯಲ್ಲಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ಹೆಸರನ್ನು ನೊಂದಾಯಿಸಿದ ಒಂದನೇ ದರ್ಜೆಯ ಅರ್ಹ ಗುತ್ತಿಗೆದಾರರಿಂದ ಹಾಗೂ ಕೇಂದ್ರ ಭೂಸಾರಿಗೆ ಮಂತ್ರಾಲಯದಿಂದ ಅನುಮೋದಿತ ಸಂಸ್ಥೆಗಳಿಂದ ಆಹ್ವಾನಿಸಲಾಗಿದೆ. ಎರಡು ಲಕೋಟೆ ಪದ್ಧತಿಯಲ್ಲಿ (1) ತಾಂತ್ರಿಕ ಬಿಡ್ (ಭಾಗ-1) ಮತ್ತು (2) ಆರ್ಥಿಕ ಬಿಡ್ (ಭಾಗ-2) ಗಳಾಗಿರುತ್ತವೆ. ಬಿಡ್‌ಗಳನ್ನು ಎರಡು ಭಾಗಗಳಲ್ಲಿ ಎರಡು ಮೊಹರಾದ ಹಾಗೂ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಎಂದು ಪ್ರತ್ಯೇಕವಾಗಿ ನಮೂದಿಸಲ್ಪಟ್ಟ ಲಕೋಟೆಗಳನ್ನು ಮತ್ತೊಂದು ಮೊಹರಾದ ಲಕೋಟೆಯಲ್ಲಿಟ್ಟು ಹಾಗೂ ಕೆಲಸದ ಹೆಸರನ್ನು ನಮೂದಿಸಲ್ಪಟ್ಟು ಗುತ್ತಿಗೆದಾರರ ಪೂರ್ಣ ಅಂಚೆ ವಿಳಾಸದೊಂದಿಗೆ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಿಗೆ ವಿಳಾಸಿಸಿ ಸಲ್ಲಿಸುವುದು. ಪೂರ್ಣ ಪ್ರಮಾಣದ ಬಿಡ್‌ಗಳನ್ನು ಅಧೀಕ್ಷಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವೃತ್ತ, ಬೆಂಗಳೂರು ಹಾಗೂ ಕಾರ್ಯಪಾಲಕ ಅಭಿಯಂತರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ದಿನಾಂಕ: 24.04.2006ರಂದು ಸಾಯಂಕಾಲ 4.00 ಗಂಟೆಯವರೆಗೆ ಕೆಪಿಡಬ್ಲ್ಯೂಡಿ ಕೋಡ್ ಭಾಗ-2, ಫಾರಂ ನಂ. ಪಿಡಬ್ಲ್ಯೂಜಿ 65 ಹಾಗೂ 66ರ ನಿಬಂಧನೆಗಳು, ಗುತ್ತಿಗೆ ಷೆಡ್ಯೂಲ್‌ನ ವಿಶೇಷ ನಿಬಂಧನೆಗಳು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದ ನಿಬಂಧನೆಗೊಳಪಟ್ಟು ಸ್ವೀಕರಿಸಲಾಗುವುದು. ತಾಂತ್ರಿಕ ಬಿಡ್ ಭಾಗ-1 ನ್ನು ಈ ಕೆಳಗೆ ಕಾಣಿಸಿದ ದಿನಾಂಕದಂದು ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ತೆರೆಯಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅರ್ಹರಾದಂಥ ಗುತ್ತಿಗೆದಾರರ ಆರ್ಥಿಕ ಬಿಡ್ ಲಕೋಟೆಗಳನ್ನು ಮಾತ್ರ ತೆರೆಯಲಾಗುತ್ತದೆ. ಈ ಕೆಳಗೆ ಕಾಣಿಸಿದ ದಿನಗಳಲ್ಲಿ ಯಾವುದಾದರೂ ರಜಾ ದಿನವಾದಲ್ಲಿ, ಮುಂದೆ ಸೂಕ್ತ ದಿನಾಂಕವನ್ನು ತಿಳಿಸಲಾಗುವುದು.

ಟೆಂಡರ್ ಕರೆ ಸಂಖ್ಯೆ ಮೊದಲನೇ ಕರೆ

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗೆ ನಿಗದಿಪಡಿಸಿದ ಅಂದಾಜು ಮೊತ್ತ. (ರೂ. ಲಕ್ಷಗಳಲ್ಲಿ) | ಇಡುಗಂಟು (ಇಎಂಡಿ) (ಮೊತ್ತ ರೂ.ಗಳಲ್ಲಿ) | ಖಾಲಿ ಟೆಂಡರ್ ಫಾರ್ಮಿನ ಬೆಲೆ ಸೆಟ್ಟಿಗೆ+ ಟ್ಯಾಕ್ಸ್ ಮರು ಪಾವತಿಯಾಗದ | ಕೆಲಸದ ಸ್ವರೂಪ | ಕಾಮಗಾರಿ ಪೂರ್ಣಗೊಳಿಸುವ ಕಾಲಾವಧಿ (ಮಳೆಗಾಲ ಸಹಿತ) |
|---|---|---|---|---|---|---|
| 1. | ರಾಷ್ಟ್ರೀಯ ಹೆದ್ದಾರಿ-13ರ ಸೊಲ್ಲಾಪುರ-ಮಂಗಳೂರು ಸೆಕ್ಷನ್‌ನ ಕಿ.ಮೀ. 290.00 ರಿಂದ 300.00 ರವರೆಗಿನ ರಸ್ತೆಯ ಐ.ಆರ್.ಕ್ಯೂ.ಪಿ. ಕಾಮಗಾರಿ. | 215.00 | ರೂ. 2,15,000 | ರೂ.22000+ 12.5% ವ್ಯಾಟ್ | ಬಿ.ಎಂ. ಮತ್ತು ಎಸ್.ಡಿ.ಬಿ.ಸಿ. ಕಾಮಗಾರಿ | 2 ತಿಂಗಳು ಮಳೆಗಾಲ ಸಹಿತ |

**ಷರತ್ತುಗಳು:** 1) ಕೆಲಸಕ್ಕೆ ಬಿಡ್ ಮಾಡಲು ಆಸಕ್ತಿ ಇರುವ ಗುತ್ತಿಗೆದಾರರು ಅರ್ಜಿಯನ್ನು ಖಾಲಿ ಟೆಂಡರ್ ಫಾರಂಗೆ ನಿಗದಿಪಡಿಸಿರುವ ಮೊತ್ತವನ್ನು (ಹಿಂದಿರುಗಿಸಲಾಗದ) ನಗದು ಅಥವಾ ಡಿ.ಡಿ.ಯನ್ನು ಕಾರ್ಯನಿರ್ವಾಹಕ ಅಭಿಯಂತರು ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿಗೆ ಮತ್ತು ಚಿತ್ರದುರ್ಗದಲ್ಲಿ ಪಾವತಿಯಾಗುವಂತೆ, ಕೆಳಗೆ ಸಹಿಮಾಡಿರುವವರ ಕಛೇರಿಗೆ ಸಲ್ಲಿಸತಕ್ಕದ್ದು, ಗುತ್ತಿಗೆದಾರರು ಗುತ್ತಿಗೆದಾರರ ನೊಂದಾವಣೆ ಪತ್ರದ ಪ್ರತಿ, ಇತ್ತೀಚಿನ ಕರ್ನಾಟಕ ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು (ಸಂಬಂಧಪಟ್ಟ ಇಲಾಖೆಯಿಂದ ಪಡೆದು) ಹಾಗೂ ಕಾಮಗಾರಿಗೆ ನಿಗದಿಪಡಿಸಿದ ಯಂತ್ರೋಪಕರಣಗಳಿಗೆ ಮಾಲೀಕತ್ವದ ಪ್ರಮಾಣ ಪತ್ರಗಳು, ಈ ಎಲ್ಲಾ ದಾಖಲೆಗಳನ್ನು, ವಿಭಾಗ ಮಟ್ಟದ ಅಧಿಕಾರಿಗಳಿಗೆ ಕಡಿಮೆಯಿಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಿದ ಪ್ರತಿಗಳನ್ನು ಅರ್ಜಿಯ ಜೊತೆಯಲ್ಲಿ ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

2) ಟೆಂಡರು ದಿನಾಂಕಗಳ ವಿವರಗಳು ಈ ಕೆಳಕಂಡಂತಿವೆ.

| | | |
|---|---|---|
| ಅ) | ಖಾಲಿ ಟೆಂಡರ್ ಫಾರಂಗಳಿಗಾಗಿ ಅರ್ಜಿ ಸಲ್ಲಿಸುವ ಹಾಗೂ ಖಾಲಿ ಟೆಂಡರ್ ಫಾರಂಗಳನ್ನು ನೀಡುವ ದಿನಾಂಕ: | 22.04.2006ರವರೆಗೆ (ಕಛೇರಿ ವೇಳೆಯಲ್ಲಿ) |
| ಆ) | ಪೂರ್ತಿಗೊಳಿಸಿದ ಮೊಹರಾದ ಟೆಂಡರುಗಳನ್ನು ಸಲ್ಲಿಸುವ ದಿನಾಂಕ: | 24.04.2006 ಮಧ್ಯಾಹ್ನ 4.00 ಗಂಟೆಯವರೆಗೆ. |
| ಈ) | ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ: | 24.04.2006 ಸಾಯಂಕಾಲ 5.00 ಗಂಟೆಗೆ ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ. |
| ಉ) | ತಾಂತ್ರಿಕವಾಗಿ ಅರ್ಹವಾದ ತಾಂತ್ರಿಕ ಬಿಡ್‌ಗಳ ಅರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕ: | 02.05.2006 ಸಾಯಂಕಾಲ 5.00 ಗಂಟೆ ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ. |

**ತಾಂತ್ರಿಕ ಬಿಡ್‌ಗಳಿಗೆ ಷರತ್ತುಗಳು**

1. ಇ.ಎಂ.ಡಿ. ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದು ಡಿ.ಡಿ.: ಎಫ್.ಡಿ.ಆರ್.: ಪೇ ಆರ್ಡರ್: ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಷೆಡ್ಯೂಲ್ಡ್ ಬ್ಯಾಂಕ್‌ಗಳಿಂದ ಪಡೆದ ಬ್ಯಾಂಕ್ ಗ್ಯಾರಂಟಿ ಅಥವಾ ರಾಷ್ಟ್ರೀಯ ಉಳಿತಾಯ ಪತ್ರ (ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಒತ್ತೆ ಇಡತಕ್ಕದ್ದು) ವನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಸಲ್ಲಿಸತಕ್ಕದ್ದು. ಇ.ಎಂ.ಡಿ.ಯನ್ನು ಬೇರಾವುದೇ ಹೆಸರಿನಲ್ಲಿ ಪಡೆದ ಅಥವಾ ಒತ್ತೆ ಇಡಲಾದಲ್ಲಿ ತಾಂತ್ರಿಕ ಬಿಡ್‌ಗಳನ್ನು ಯಾವುದೇ ವಿಚಾರಣೆ ಅಥವಾ ವಿವರಣೆಯನ್ನು ಮಾಡದೆ, ಅನರ್ಹಗೊಳಿಸಲಾಗುವುದು. ಬ್ಯಾಂಕ್ ಗ್ಯಾರಂಟಿಯು ಕಡ್ಡಾಯವಾಗಿ ಟೆಂಡರ್ ಫಾರಂನಲ್ಲಿರುವ ಪಿ.ಡಬ್ಲ್ಯೂ.ಜಿ.66 ದಕ್ಕೆ ಅನುಗುಣವಾಗಿರತಕ್ಕದ್ದು.

2. ಈ ಟೆಂಡರ್‌ನಲ್ಲಿ ಕರೆಯಲಾಗಿರುವ ಕಾಮಗಾರಿಯ ಡಿಫೆಕ್ಟ್ ಲಯಾಬಲಿಟಿ ಸಮಯವು ಕಾಮಗಾರಿ ಪೂರ್ಣಗೊಳಿಸಿದ ದಿನಾಂಕದಿಂದ ಒಂದು ವರ್ಷವಾಗಿರುತ್ತದೆ. ಕಾಮಗಾರಿಯಲ್ಲಿ ನಿರ್ವಹಿಸಬೇಕಾದ ಕೆಲಸಗಳು ಅತ್ಯುನ್ನತ ಗುಣಮಟ್ಟದಿಂದ ಕೂಡಿದ್ದು ಒಂದು ವರ್ಷದವರೆಗೆ ಯಾವುದೇ ರಿಪೇರಿಯ ಸಾಧ್ಯತೆಗಳಿರುವುದಿಲ್ಲ. ಈ ಮೇಲ್ಕಂಡ ರೀಚಿನ ಕಾಮಗಾರಿಗೆ ಈ ಒಂದು ವರ್ಷದ ಅವಧಿಯಲ್ಲಿ ಯಾವುದಾದರೂ ರಿಪೇರಿಯ ಅವಶ್ಯಕತೆ ಬಿದ್ದಲ್ಲಿ ಗುತ್ತಿಗೆದಾರರು: ಸಂಸ್ಥೆಗಳವರು ಸದರಿ ರಿಪೇರಿ ಅಥವಾ ಮರು ನಿರ್ಮಾಣವನ್ನು ಗುತ್ತಿಗೆದಾರರ: ಸಂಸ್ಥೆಯ ಸ್ವಂತ ವೆಚ್ಚದಲ್ಲಿ ಮಾಡತಕ್ಕದ್ದು. ಇ.ಎಂ.ಡಿ.: ಎಸ್.ಡಿ. ಪರಿಕರಗಳನ್ನು ಮೇಲಿನ ಷರತ್ತಿಗನುಗುಣವಾಗಿ ಸಲ್ಲಿಸತಕ್ಕದ್ದು.

3. ಪ್ರತಿ ಗುತ್ತಿಗೆದಾರರು ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವವನ್ನು ಹೊಂದಿರಬೇಕು ಹಾಗೂ ತಾಂತ್ರಿಕ ಬಿಡ್‌ನ ಜೊತೆಯಲ್ಲಿ ಸಂಬಂಧಪಟ್ಟ ಮಾಲೀಕತ್ವದ ಸಾಕ್ಷಿಯನ್ನು ಈ ಕೆಳಕಂಡಂತೆ ಸಲ್ಲಿಸತಕ್ಕದ್ದು. ಮೇಲಿನ ಮಾಲೀಕತ್ವದ ಸಾಕ್ಷಿಗಳಿಲ್ಲದ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.

| ಕ್ರ. ಸಂ. | ಯಂತ್ರೋಪಕರಣಗಳು | ಬೇಕಾದ ಸಂಖ್ಯೆ | ಮಾಲೀಕತ್ವದ ಪುರಾವೆಗಳು |
|---|---|---|---|
| 1. | 40/60 ಟಿ.ಪಿ.ಹೆಚ್. ಅಥವಾ ಹೆಚ್ಚಿನ ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್ (ಎಂ.ಓ.ಆರ್.ಟಿ. ಮತ್ತು ಹೆಚ್ ಸ್ಪೆಸಿಫಿಕೇಷನ್‌ಗೆ ಅನುಗುಣವಾಗಿ) | ಒಂದು (1) | ಖರೀದಿಸಿದ ಇನ್‌ವಾಯ್ಸ್: ಸೇಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |
| 2. | ಪೇವರ್ ಫಿನೀಷರ್ | ಒಂದು (1) | -ಸದರಿ- |
| 3. | ವೈಬ್ರೇಟರಿ ರೋಲರ್ | ಒಂದು (1) | -ಸದರಿ- |
| 4. | ಸ್ಟ್ಯಾಟಿಕ್ ರೋಡ್‌ರೋಲರ್ | ಎರಡು (2) | -ಸದರಿ- |
| 5. | ಮೆಕ್ಯಾನಿಕಲ್ ಸ್ಪ್ರೇಯರ್ | ಎರಡು (2) | -ಸದರಿ- |
| 6. | ಟಿಪ್ಪರ್‌ಗಳು | ನಾಲ್ಕು (4) | ಆರ್.ಟಿ.ಓ. ರವರಿಂದ ಪಡೆದ ರಿಜಿಸ್ಟ್ರೇಷನ್ ಸರ್ಟಿಫಿಕೇಟ್ |
| 7. | ಎಕ್ಸ್‌ವೇಟರ್ | ಒಂದು (1) | ಮಾಲೀಕತ್ವದ ಪ್ರಮಾಣ ಪತ್ರ |
| 8. | ಕಾಂಕ್ರೀಟ್ ಮಿಕ್ಸರ್‌ಗಳು | ಎರಡು (2) | ಖರೀದಿಸಿದ ಇನ್‌ವಾಯ್ಸ್: ಸೇಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |
| 9. | ವೈಬ್ರೇಟರ್‌ಗಳು | ಎರಡು (2) | -ಸದರಿ- |

1. ಪ್ರತಿ ಗುತ್ತಿಗೆದಾರರು ಟೆಂಡರ್‌ಗಿಟ್ಟ ಮೊತ್ತದ ಶೇಕಡಾ 30ರಷ್ಟು ಪ್ರಮಾಣದ ಇದೇ ತರಹದ ಕೆಲಸವನ್ನು ಸಮರ್ಪಕವಾಗಿ ಕಳೆದ ಐದು ಆರ್ಥಿಕ ವರ್ಷದ ಬ್ಲಾಕ್ ಅವಧಿಯಲ್ಲಿ ಮುಗಿಸಿರಬೇಕು. ಅಥವಾ ಗುತ್ತಿಗೆದಾರರು ಶೇಕಡ 30ರಷ್ಟು ಪ್ರಮಾಣದ ಇದೇ ತರಹದ ಒಂದೇ ಕೆಲಸದ ಬಿಲ್ಲನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಪಡೆದಿರಬೇಕು. ಇದಕ್ಕೆ ಸಂಬಂಧಪಟ್ಟಂತೆ ಅನುಭವದ ಪ್ರಮಾಣ ಪತ್ರದಲ್ಲಿ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ವಿವರಗಳು ಇರತಕ್ಕದ್ದು. ಇಲ್ಲವಾದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.

2. ಆರ್ಥಿಕ ಸಾಮರ್ಥ್ಯದ ಸಾಕ್ಷಿಯು, ಟೆಂಡರಿಗಿಟ್ಟ ಮೊತ್ತದ ಶೇಕಡಾ 30ರಷ್ಟು ಪ್ರಮಾಣದ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನ "ಲೈನ್ ಆಫ್ ಕ್ರೆಡಿಟ್‌ಅನ್ನು" ಕಡ್ಡಾಯವಾಗಿ ತಾಂತ್ರಿಕ ಬಿಡ್‌ನಲ್ಲಿ ನಿಗದಿಪಡಿಸಿದ ಪ್ರೊಫಾರ್ಮಾದಲ್ಲಿ ಸಲ್ಲಿಸತಕ್ಕದ್ದು. "ಲೈನ್ ಆಫ್ ಕ್ರೆಡಿಟ್‌ಅನ್ನು" ಸಲ್ಲಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.

3. ತಾಂತ್ರಿಕ ಬಿಡ್ ಜೊತೆಯಲ್ಲಿ ಲಗತ್ತಿಸುವ ಎಲ್ಲಾ ದಾಖಲಾತಿಗಳನ್ನು ವಿಭಾಗಮಟ್ಟದ ಅಧಿಕಾರಿಗೆ ಕಡಿಮೆ ಇಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಲ್ಪಟ್ಟಿರಬೇಕು. ಇಲ್ಲವಾದಲ್ಲಿ ಬಿಡ್‌ಗಳು ಅನರ್ಹಗೊಳ್ಳುತ್ತವೆ. ಮೂಲ ದಾಖಲಾತಿಗಳನ್ನು ಟೆಂಡರ್ ಪ್ರಕ್ರಿಯೆಯ ಯಾವುದೇ ಮಟ್ಟದಲ್ಲಿ ಪರಿಶೀಲನೆಗಾಗಿ ಕೇಳಿದಾಗ ಒದಗಿಸತಕ್ಕದ್ದು. ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಕೇಳಿದಾಗ ಒದಗಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.

4. ಸಂಬಂಧಪಟ್ಟ ದಾಖಲಾತಿಗಳನ್ನು ಮತ್ತು ವಿವರಣೆಗಳನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಒದಗಿಸತಕ್ಕದ್ದು. ಕಂಪನಿಯ ವಿವರಗಳು: ಏಜೆನ್ಸಿಗಳು: ಸಂಸ್ಥೆಯ ಪ್ರೊಫೈಲ್‌ಅನ್ನು ಲಗತ್ತಿಸತಕ್ಕದ್ದು.

5. ಜಾಯಿಂಟ್ ವೆಂಚರ್ ಟೆಂಡರ್‌ಗಳನ್ನು ಅಂಗೀಕರಿಸುವುದಿಲ್ಲ.

6. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೇ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಹಕ್ಕು ಸಂಬಂಧಪಟ್ಟ ಅಧಿಕಾರಿಗಳಿಗೆ ಇರುತ್ತದೆ.

7. ಕರಾರುಗಳನ್ನೊಳಗೊಂಡ ಟೆಂಡರುಗಳನ್ನು ಸ್ವೀಕೃತಿಗಾಗಿ ಪರಿಗಣಿಸುವುದಿಲ್ಲ.

8. ಮೇಲಿನ ಕೆಲಸಗಳ ಬಗ್ಗೆ ಯಾವುದೇ ಮಾಹಿತಿಯನ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಬಿ. ಪ್ರಭಾಕರಶೆಟ್ಟಿ**
ಕಾರ್ಯಪಾಲಕ ಅಭಿಯಂತರು,
ರಾ.ಹೆ.ವಿಭಾಗ, ಚಿತ್ರದುರ್ಗ.

ಪಿ.ಆರ್.161

## ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ

## ಕೈಗಾರಿಕೆ ಮತ್ತು ವಾಣಿಜ್ಯ ನಿರ್ದೇಶನಾಲಯ, ಖನಿಜ ಭವನ, ನಂ.49, ಡಿ.ದೇವರಾಜ್ ಅರಸು ರಸ್ತೆ, ಬೆಂಗಳೂರು

## ಕಛೇರಿ ಆದೇಶ

**ಸಂಖ್ಯೆ: ಆಡಳಿತ/ ಸಿಬ್ಬಂದಿ/ ಇ5/ 218/ 2005-06, ದಿನಾಂಕ:8ನೇ ಮಾರ್ಚ್, 2006**

**ವಿಷಯ :** ಶ್ರೀಮತಿ ಪಾರ್ವತಿ, ಬಿನ್ ಜೆಟ್ಟೆಪ್ಪ, ಮುಚಳಮ, ಬಸವಕಲ್ಯಾಣ ಬೀದರ್ ಜಿಲ್ಲೆ ರವರನ್ನು ಇಲಾಖೆಯಲ್ಲಿನ ವಾಹನ ಚಾಲಕರ ನೇರ ನೇಮಕಾತಿ ಬ್ಯಾಕ್‌ಲಾಗ್ ಹುದ್ದೆಗೆ ನೇಮಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 21.11.2001.
2. ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಸಕನಿ/ ಬಿ ಮತ್ತು ಆರ್/ ಸಿಆರ್/ 14/ 2003-04 ದಿನಾಂಕ: 05.02.2004.
3. ಕರ್ನಾಟಕ ರಾಜ್ಯಪತ್ರ ದಿನಾಂಕ: 21.04.2005 ಹಾಗೂ 15.09.2005ರಲ್ಲಿ ಈ ಕಛೇರಿ ಅಧಿಸೂಚನೆ ಸಂಖ್ಯೆ: ಆಡಳಿತ/ ಸಿಬ್ಬಂದಿ/ ಇ5/ 98/ 2005-06 ದಿನಾಂಕ: 02.08.2005.
4. ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಬೀದರ್ ರವರ ಪತ್ರ ಸಂಖ್ಯೆ: SB/BDR/VRS/694/2005 ದಿನಾಂಕ: 13.01.2006.
5. ಸಮಾಜ ಕಲ್ಯಾಣ ಇಲಾಖೆ, ಆಯುಕ್ತರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಸಕನಿ/ ಬಿ ಮತ್ತು ಆರ್/ ತನ/ ಸಿಆರ್6/ 05-06 ದಿನಾಂಕ: 22.12.2005.
6. ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಬೀದರ್ ರವರ ಪತ್ರ ಸಂಖ್ಯೆ: ಜಿಸಕಬೀ/ ಕಮೇ/ ಸಿಂಧುತ್ವ/ ಸಿಆರ್/ 119/ 2005-06/ 2414 ದಿನಾಂಕ: 09.01.2006.

ಉಲ್ಲೇಖ (1)ರ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕ ಸೇವಾ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಾದ ಹುದ್ದೆಗಳನ್ನು ತುಂಬದೆ ಇರುವಂತಹ ಖಾಲಿ ಹುದ್ದೆಗಳಿಗೆ (ವಿಶೇಷ ನೇಮಕಾತಿ) ನಿಯಮಾವಳಿ 2001ನ್ನು ಜಾರಿಗೊಳಿಸಲಾದ ಹಿನ್ನೆಲೆಯಲ್ಲಿ ಉಲ್ಲೇಖ (3)ರ ಈ ಕಛೇರಿ ಅಧಿಸೂಚನೆಯಲ್ಲಿ ಪರಿಶಿಷ್ಟ ಜಾತಿಯ (ಸಾಮಾನ್ಯ) ವರ್ಗದಲ್ಲಿ ಒಂದು ವಾಹನ ಚಾಲಕರ ಹುದ್ದೆಗೆ ಹಾಗೂ ಪರಿಶಿಷ್ಟ ಜಾತಿಯ ಮಹಿಳಾ ಮೀಸಲಾತಿ ವರ್ಗದಲ್ಲಿ ಒಂದು ವಾಹನ ಚಾಲಕರ ಹುದ್ದೆ ಹೀಗೆ ಎರಡು ನೇರ ನೇಮಕಾತಿ ಬ್ಯಾಕ್‌ಲಾಗ್ ಹುದ್ದೆಯನ್ನು ತುಂಬಲು ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಅದರಂತೆ, ಸ್ವೀಕೃತಿಯಾದ ಅರ್ಜಿಗಳನ್ನು ಉಲ್ಲೇಖ (1)ರ ಸರ್ಕಾರದ ಅಧಿಸೂಚನೆಯಂತೆ ಪರಿಶೀಲಿಸಿ ಈ ಪೈಕಿ ವಾಹನ ಚಾಲಕರ ಬ್ಯಾಕ್‌ಲಾಗ್ ಪರಿಶಿಷ್ಟ ಜಾತಿಯ ಮಹಿಳಾ ವರ್ಗದ ಅಭ್ಯರ್ಥಿಯಾಗಿ ಆಯ್ಕೆಯಾದ ಶ್ರೀಮತಿ ಪಾರ್ವತಿ ಬಿನ್ ಜೆಟ್ಟೆಪ್ಪ, ಮುಚಳಂಬ, ಬಸವಕಲ್ಯಾಣ, ಬೀದರ್ ಜಿಲ್ಲೆ ರವರನ್ನು ವಾಹನ ಚಾಲಕರ ಹುದ್ದೆಗೆ ತಾತ್ಕಾಲಿಕವಾಗಿ ಆಯ್ಕೆ ಮಾಡಿ ವೇತನ ಶ್ರೇಣಿ ರೂ.3000-75-3450-100-4450-125-5450 ರಲ್ಲಿ ಮಾಹೆಯಾನ ರೂ.3000/- ಮತ್ತು ಇತರೆ ನಿಗದಿತ ಭತ್ಯೆಗಳು ಲಭ್ಯವಾಗುವಂತೆ ಜಂಟಿ ನಿರ್ದೇಶಕರ ಕಛೇರಿ, ಜಿಲ್ಲಾ ಕೈಗಾರಿಕಾ ಕೇಂದ್ರ, ಶಿವಮೊಗ್ಗ ಇಲ್ಲಿಗೆ ನೇಮಿಸಿ ಆದೇಶಿಸಲಾಗಿದೆ.

ಸದರಿ ಅಭ್ಯರ್ಥಿಯ ನೇಮಕಾತಿಯು ಈ ಕೆಳಗೆ ಸೂಚಿಸಿದ ನಿಬಂಧನೆ ಮತ್ತು ಷರತ್ತುಗಳಿಗೆ ಒಳಪಟ್ಟಿರುತ್ತದೆ.

1. ಅಭ್ಯರ್ಥಿಯು ಈ ಆದೇಶ ಪಡೆದ 15 ದಿನಗಳೊಳಗಾಗಿ ನೇಮಕಾತಿ ಮಾಡಿರುವ ಕಛೇರಿಯಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬೀದರ್ ರವರು ಅಭ್ಯರ್ಥಿಯು ಆದೇಶ ಪಡೆದ 15 ದಿನಗಳೊಳಗಾಗಿ ಕರ್ತವ್ಯಕ್ಕೆ ಹಾಜರಾದ ಬಗ್ಗೆ ದೃಢೀಕರಿಸಿಕೊಳ್ಳುವುದು. ಯಾವುದೇ ಕಾರಣಕ್ಕೂ ಈ ಅವಧಿಯನ್ನು ವಿಸ್ತರಿಸುವುದಿಲ್ಲ. ನಿಗದಿತ ಸಮಯದಲ್ಲಿ ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗದಿದ್ದಲ್ಲಿ ಅವರ ನೇಮಕಾತಿ ಆದೇಶವು ರದ್ದಾದಂತೆ ಭಾವಿಸುವುದು.

2. ಅಭ್ಯರ್ಥಿಯು ನೇಮಕಾತಿ ಹೊಂದಿದ ಸ್ಥಳಕ್ಕೆ ಹೋಗಲು ಯಾವುದೇ ತರಹದ ಪ್ರಯಾಣ ಭತ್ಯೆ ಅಥವಾ ಇನ್ನಾವುದೇ ಭತ್ಯೆಗಳಿಗೆ ಅರ್ಹರಿರುವುದಿಲ್ಲ.

3. ಅಭ್ಯರ್ಥಿಯು ಕರ್ತವ್ಯಕ್ಕೆ ಸೇರಿದ ದಿನಾಂಕದಿಂದ 2 ವರ್ಷಗಳ ಕಾಲ ಅರ್ಹತಾ ಪೂರ್ವ ಅವಧಿಯಲ್ಲಿರುತ್ತಾರೆ.

4. ಅಭ್ಯರ್ಥಿಯು ಅರ್ಹತಾ ಪೂರ್ವ ಅವಧಿಯಲ್ಲಿ ವಾಹನ ಚಾಲಕರ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು.

5. ಸದರಿ ನೇಮಕಾತಿ ಆದೇಶವು ಮೂಲ ದಾಖಲಾತಿಗಳ ಪರಿಶೀಲನೆಯ ಷರತ್ತಿಗೆ ಒಳಪಟ್ಟಿರುತ್ತದೆ.

6. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಈ ಕೆಳಕಂಡ ಮೂಲ ದಾಖಲಾತಿಗಳನ್ನು ಸಂಬಂಧಪಟ್ಟ ಅಧಿಕಾರಿಗಳಿಗೆ ಒದಗಿಸತಕ್ಕದ್ದು.

ಎ) 7ನೇ ತರಗತಿ ಉತ್ತೀರ್ಣರಾಗಿರುವ ಬಗ್ಗೆ ಮೂಲ ಅಂಕಪಟ್ಟಿಯನ್ನು ಹಾಗೂ ಚಾಲ್ತಿಯಲ್ಲಿರುವ ಲಘು ಮೋಟಾರು ವಾಹನ ಚಾಲನೆ ಪರವಾನಗಿ ಮತ್ತು ಪ್ರಥಮ ಚಿಕಿತ್ಸೆ ಪ್ರಮಾಣ ಪತ್ರ.

ಬಿ) ವಯಸ್ಸು ಮತ್ತು ಜನ್ಮ ದಿನಾಂಕದ ಬಗ್ಗೆ ಮೂಲ ವರ್ಗಾವಣೆ ಪ್ರಮಾಣ ಪತ್ರದ (ಟಿ.ಸಿ.) ಅಥವಾ ಇತರೆ ಅಧಿಕೃತ ದಾಖಲೆಗಳು.

ಸಿ) ಜಿಲ್ಲಾ ಆರೋಗ್ಯ ಅಧಿಕಾರಿಗಳಿಂದ ದೇಹ ಸ್ಥಿತಿಯ ಬಗ್ಗೆ ಪ್ರಮಾಣ ಪತ್ರ.

ಡಿ) ಅಭ್ಯರ್ಥಿಯು ಹೊಂದಿರುವ ಸ್ಥಿರ ಮತ್ತು ಚರ ಆಸ್ತಿಯ ದೃಢೀಕರಣ ಪತ್ರ.

ಇ) ಅಭ್ಯರ್ಥಿಯು ಭಾರತ ಸಂವಿಧಾನಕ್ಕೆ ನಿಷ್ಠೆಯಿಂದ ಸೇವೆ ಸಲ್ಲಿಸುವ ಬಗ್ಗೆ ಪ್ರಮಾಣ ಪತ್ರ.

ಎಫ್) ಅಭ್ಯರ್ಥಿಯು ವಿವಾಹಿತರಾಗಿದ್ದಲ್ಲಿ ಪ್ರಮಾಣೀಕರಿಸಿದ ದೃಢೀಕರಣ ಪತ್ರ.

ಜಿ) ಅಭ್ಯರ್ಥಿಯು ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೋಂದಣಿ ಪ್ರಮಾಣ ಪತ್ರ ಪಡೆದಿದ್ದರೆ, ಸದರಿ ನೋಂದಣಿ ಪತ್ರದ ಮೂಲ ಪ್ರತಿಯನ್ನು ಸಂಬಂಧಪಟ್ಟ ಅಧಿಕಾರಿಗಳಿಗೆ ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ಹಾಜರಿಪಡಿಸುವುದು.

ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಶಿವಮೊಗ್ಗ ರವರಿಗೆ ಅಭ್ಯರ್ಥಿಯ ಅರ್ಜಿ ಮತ್ತು ದಾಖಲಾತಿಗಳ ಪ್ರತಿಗಳನ್ನು ಹಾಗೂ ಗೆಜೆಟ್ ಪ್ರಕಟಣೆಯನ್ನು ಇದರೊಂದಿಗೆ ಕಳುಹಿಸಲಾಗಿದೆ. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಮೂಲ ದಾಖಲಾತಿಗಳನ್ನು ಪರಿಶೀಲಿಸಿ ಜನ್ಮ ದಿನಾಂಕ, ಜಾತಿ, ಗಳಿಸಿದ ಅಂಕಗಳನ್ನು ಮತ್ತು ವಾಹನ ಪರವಾನಿಗೆ ಚಾಲ್ತಿಯಲ್ಲಿರುವ ಬಗ್ಗೆ ದೃಢೀಕರಿಸಿಕೊಳ್ಳಲು ಸೂಚಿಸಿದೆ. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾದ ನಂತರ ಅಭ್ಯರ್ಥಿಯು ಸಲ್ಲಿಸಿದ ಮೂಲ ದಾಖಲಾತಿಗಳ ಆಧಾರದ ಮೇಲೆ ಸಲ್ಲಿಸಿದ ದಾಖಲಾತಿಗಳ ದೃಢೀಕೃತ ಪ್ರತಿಗಳೊಂದಿಗೆ ವರದಿಯನ್ನು ಈ ಕಛೇರಿಗೆ ಕಳುಹಿಸಲು ಆದೇಶಿಸಿದೆ.

ಹಾಜರಾತಿ ಬಗ್ಗೆ ವರದಿ ಮಾಡಿದ ನಂತರ ಹೊಸ ಹುದ್ದೆಯ ದೃಢೀಕರಣ ಪತ್ರವನ್ನು ಈ ಕಛೇರಿಯಿಂದ ನೀಡಲಾಗುವುದು. ಉದ್ಯೋಗ ವಿನಿಮಯ ಕೇಂದ್ರದ ನೋಂದಣಿ ಪತ್ರವನ್ನು ಸಂಬಂಧಪಟ್ಟ ಕಛೇರಿಗೆ ಹಿಂತಿರುಗಿಸುವುದು.

ಪಿ.ಆರ್.162 ಅಧಿಕ ನಿರ್ದೇಶಕರು (ಆಡಳಿತ).

## ಪೊಲೀಸ್ ಅಧೀಕ್ಷಕರವರ ಕಛೇರಿ, ಉತ್ತರ ಕನ್ನಡ, ಕಾರವಾರ

## ಅಧಿಸೂಚನೆ

## ಟೆಂಡರ್ ಮತ್ತು ಬಹಿರಂಗ ಹರಾಜು

### ಸಂಖ್ಯೆ: ಲೆ.ಪ.7/ ಎಂಟಿ 168/ 2005-06, ದಿನಾಂಕ:8/ 14ನೇ ಮಾರ್ಚ್, 2006

**ವಿಷಯ :** ಉತ್ತರ ಕನ್ನಡ ಜಿಲ್ಲಾ ಪೊಲೀಸ್ ವಾಹನ ವಿಭಾಗದಲ್ಲಿರುವ ಟಾಯರ್, ಟ್ಯೂಬ್ ಮತ್ತು ವಾಹನ ಬಿಡಿಭಾಗಗಳ ಟೆಂಡರ್ ಕಂ ಹರಾಜು ಮೂಲಕ ದಿನಾಂಕ: 17.04.2006 ರಂದು ಸಾರ್ವಜನಿಕರಿಗೆ ಮಾರಾಟ ಮಾಡುವುದರ ಕುರಿತು.

**ಉಲ್ಲೇಖ:** ವಲಯ ಕಛೇರಿ ಆದೇಶ ಸಂಖ್ಯೆ: ಎಸಿಟಿ/ ಸಿ/ 132/ 05-06 ದಿನಾಂಕ: 01.10.2005.

ಸಾರ್ವಜನಿಕರಿಗೆ ಈ ಮೂಲಕ ತಿಳಿಸುವುದೇನೆಂದರೆ, ಉಲ್ಲೇಖ ಒಂದರ ಆದೇಶದಲ್ಲಿ ಉತ್ತರ ಕನ್ನಡ ಜಿಲ್ಲಾ ಪೊಲೀಸ್ ವಾಹನ ವಿಭಾಗದಲ್ಲಿರುವ ಟಾಯರ್, ಟ್ಯೂಬ್ ಮತ್ತು ವಾಹನ ಬಿಡಿಭಾಗಗಳ ದಿನಾಂಕ: 17.04.2006ರಂದು ಬೆಳಿಗ್ಗೆ 12.00 ಗಂಟೆಗೆ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಮೋಟಾರು ವಾಹನ ವಿಭಾಗದ ಆವರಣದಲ್ಲಿ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಆಸಕ್ತಿವುಳ್ಳ ಸಾರ್ವಜನಿಕರು ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ಈ ನಿರುಪಯುಕ್ತ ಟಾಯರ್, ಟ್ಯೂಬ್ ಮತ್ತು ವಾಹನಗಳ ಬಿಡಿಭಾಗಗಳನ್ನು ಖರೀದಿಸಬಹುದಾಗಿದೆ.

ಹೆಚ್ಚಿನ ವಿವರಗಳನ್ನು ಈ ಕಛೇರಿಯ ನೋಟಿಸ್ ಬೋರ್ಡಿನಲ್ಲಿರುವ ವಿವರವಾದ ಪ್ರಕಟಣೆಯಿಂದ ತಿಳಿದುಕೊಳ್ಳುವುದು.

ಪೊಲೀಸ್ ಅಧೀಕ್ಷಕರು,

ಪಿ.ಆರ್.163 ಉತ್ತರ ಕನ್ನಡ, ಕಾರವಾರ.

## ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬಹುಮಹಡಿಗಳ ಕಟ್ಟಡ, ಬೆಂಗಳೂರು-1

## ನಮೂನೆ-1

## (9ನೇ ನಿಯಮ ನೋಡಿ)

## ಅಧಿಸೂಚನೆ

ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ರಾಯಚೂರು ಇಲ್ಲಿ ಕೆಲಸ ನಿರ್ವಹಿಸುತ್ತಿರುವ **ಶ್ರೀಮತಿ ವಹೀದಾ ಬೇಗಂ ಬೆಟಗೇರಿ,** ಸಹಾಯಕ ಸಾಂಖ್ಯಿಕ ಅಧಿಕಾರಿ, ಇವರ ಹೆಸರನ್ನು **"ವಂದನಾ ಸಿದ್ಧಪ್ಪ ಸಿಂಧನೂರ"** ಎಂದು ಹೆಸರು ಬದಲಾವಣೆಗೆ ಅನುಮತಿ ನೀಡಲಾಗಿದೆ.

**ಜಿ. ಪ್ರಕಾಶಂ**

ಪಿ.ಡಿ.75 ನಿರ್ದೇಶಕರು,

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ.

**IN THE COURT OF THE IVTH ADDITIONAL CITY CIVIL JUDGE AT MAYOHALL, BANGALORE**
**CCH- 21**
**P & SC No. 15013/06**

| **Petitioners:** | | **Respondents:** |
|---|---|---|
| T.N. Subramanian - 69 years,<br>S/o. T.G. Nagarathinam,<br>Resident of: No.7, Park Road,<br>Tasker town, Bangalore. | **-Vs-** | NIL |

**PUBLIC NOTICE**

Notice is hereby given that the above petition filed by the Petitioners under Section 372 of the Indian Succession Act, for grant of SUCCESSION-CERTIFICATE in respect of debts and securities of late Maheswari, who died at Bangalore on 16.08.2003

Be it known that no Caveat has been entered and the Petitions are posted for hearing on 15.04.2006. All persons claiming to have interest may come and see the proceedings before grant of Succession-Certificate in favour of the Petitioners.

Given under my hand and seal of the Court Dated the 23.03.2006.

Assistant Registrar,
City Civil Court, Mayohall, Bangalore.

PD-41

**IN THE COURT OF THE IVTH ADDITIONAL CITY CIVIL JUDGE AT MAYOHALL, BANGALORE, Court Hall-21**
**P & SC No. 15014/2006**

| **Petitioners:** | | **Respondents:** |
|---|---|---|
| 1. John Marg Sunil, 22 years<br>2. Fabius Marg Arun 17 years,<br>Petitioner No.2 is represented by Petitioner No.1<br>both are R/o 136/ 7, Grape Garden, Ejipura, Viveknagar, Bangalore-47. | **-Vs-** | 1. Canara Bank, Trinity Circle Branch, Bangalore.<br>2. Indian Bank, Richmond Circle Branch, Bangalore.<br>3. Chief Engineer (AF) No.2, DC Area, MES Road, Yeshwanthpur Post, Bangalore. |

**PUBLIC NOTICE**

Notice is hereby given that a petition has been made to this Court u/s. 372 of the Indian succession Act, for issuance of Succession Certificate in favour of Petitioner to operate Bank/ A/c Canara Bank and Indian Bank after benefits of pension at respondent No.3 of the deceased M. Krishnamurthy, who died on 17.01.2006 at Bangalore.

Be it known that no Caveat has been entered and the said Petition is posted to 22.04.2006. All persons claiming to have intent may come and see the proceedings before grant of Succession Certificate.

Given under my hand and seal of the Court on 24.03.2006.

By Order of Court,
Asst. Registrar, City Civil Court,
Mayohall Unit, Bangalore.

PD-42

**IN THE COURT OF THE IVTH ADDITIONAL CITY CIVIL JUDGE AT MAYOHALL, BANGALORE**

**CCH- 21**

**P & SC No. 15053/05**

| **Petitioners:** | | **Respondents:** |
|---|---|---|
| T.N. Subramanian - 69 years,<br>S/o. T.G. Nagarathinam,<br>Resident of: No.7, Park Road,<br>Tasker town, Bangalore. | **-Vs-** | NIL |

**PUBLIC NOTICE**

Notice is hereby given that the above petition filed by the Petitioners under Section 372 of the Indian Succession Act, for grant of SUCCESSION-CERTIFICATE in respect of debts and securities of late T.G. Nagarathinam, who died at Bangalore on 11.05.1971.

Be it known that no Caveat has been entered and the Petitions are posted for hearing on 12.04.2006. All person claiming to have interest may come and see the proceedings before grant of Succession-Certificate in favour of the Petitioners.

Given under my hand and seal of the Court Dated the 23.03.2006.

Assistant Registrar,
City Civil Court, Mayohall, Bangalore.

PD-43

**IN THE COURT OF THE IVTH ADDITIONAL CITY CIVIL JUDGE AT MAYOHALL, BANGALORE**

**CCH- 21**

**P & SC No. 15054/05**

| **Petitioners:** | | **Respondents:** |
|---|---|---|
| T.N. Jayakumar - 54 years<br>S/o. T.G. Nagarathinam,<br>Resident of: No.7, Park Road,<br>Tasker town, Bangalore. | **-Vs-** | NIL |

**PUBLIC NOTICE**

Notice is hereby given that the above petition filed by the Petitioners under Section 372 of the Indian Succession Act, for grant of SUCCESSION-CERTIFICATE in respect of debts and securities of late T.G. Nagarathinam, who died at Bangalore on 11.05.1971.

Be it known that no Caveat has been entered and the Petitions are posted for hearing on 12.04.2006. All person claiming to have interest may come and see the proceedings before grant of Succession-Certificate in favour of the Petitioners.

Given under my hand and seal of the Court Dated the 23.03.2006.

Assistant Registrar,

PD-44 City Civil Court, Mayohall, Bangalore.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ**

**ಟೆಂಡರ್ ಅಧಿಸೂಚನೆ**

**ಸಂಖ್ಯೆ: ಸಿಆಸುಇ 38 ಡಿಇವಿ, 2006, ಬೆಂಗಳೂರು, ದಿನಾಂಕ: 24ನೇ ಮಾರ್ಚ್, 2006**

ವಿಧಾನಸೌಧ, ವಿಕಾಸಸೌಧ, ಬಹುಮಹಡಿ ಕಟ್ಟಡದ ಸಂಕೀರ್ಣ (ವಿವಿಧ ಹಂತಗಳು ಸೇರಿದಂತೆ) ಹಾಗೂ ವಿಶ್ವೇಶ್ವರಯ್ಯ ಕೇಂದ್ರ ಕಟ್ಟಡಗಳಲ್ಲಿ ಇಲಿ ಮತ್ತು ಕ್ರಿಮಿಕೀಟ ನಾಶಕ ವ್ಯವಸ್ಥೆಯ ಗುತ್ತಿಗೆಯನ್ನು ದಿನಾಂಕ: 01.05.2006 ರಿಂದ 30.04.2007ರ ಒಂದು ವರ್ಷದ ಅವಧಿಗೆ ವಹಿಸುವ ಬಗ್ಗೆ ಪ್ರಸಿದ್ಧ ಸಂಸ್ಥೆಗಳಿಂದ ಟೆಂಡರನ್ನು ಕರೆಯಲಾಗಿದೆ.

2. ಗುತ್ತಿಗೆ ನಿರ್ವಹಿಸಬೇಕಾದ ಪ್ರದೇಶಗಳ ವಿವರಗಳು ಈ ಕೆಳಗಿನಂತೆ ಇದೆ:

1) ಸಂಪೂರ್ಣ ವಿಧಾನಸೌಧ ಕಟ್ಟಡ ಹಾಗೂ ಅದರ ಸುತ್ತಮುತ್ತಲಿರುವ ಉದ್ಯಾನವನ.
2) ಸಂಪೂರ್ಣ ವಿಕಾಸಸೌಧ ಕಟ್ಟಡ ಮತ್ತು ಅದರ ಸುತ್ತಮುತ್ತಲಿನ ಆವರಣ.
3) ಬಹುಮಹಡಿ ಕಟ್ಟಡದ ಎಲ್ಲಾ ಹಂತದ ಸಂಪೂರ್ಣ ಕಟ್ಟಡಗಳು ಮತ್ತು ಆವರಣ.
4) ವಿಶ್ವೇಶ್ವರಯ್ಯ ಕೇಂದ್ರ ಕಟ್ಟಡದ ಸಂಪೂರ್ಣ ಕಟ್ಟಡ ಮತ್ತು ಅದರ ಆವರಣ.

3. (1) ಈ ಗುತ್ತಿಗೆಯನ್ನು ವಹಿಸುವ ಸಂಸ್ಥೆಯು ಎಲ್ಲಾ 4 ಕಟ್ಟಡಗಳಲ್ಲಿ, ಕಟ್ಟಡ ಒಂದಕ್ಕೆ ಒಬ್ಬರಂತೆ ಪ್ರತಿದಿನ ಒಬ್ಬರನ್ನು ಈ ಕೆಲಸಗಳಿಗಾಗಿ ನೇಮಿಸತಕ್ಕದ್ದು.

(2) ಈ ರೀತಿ 4 ಕಟ್ಟಡಗಳಲ್ಲಿ ಈ ಕೆಲಸಗಳಿಗೆ ಹಾಜರಾಗುವ ಸಿಬ್ಬಂದಿಯು ಪ್ರತಿ ದಿನ ಬಂದಿರುವ ದೂರುಗಳನ್ನು ಹಿರಿಯ ಮೇಲ್ವಿಚಾರಕರು, ಸಿಆಸುಇ (ಕಾರ್ಯಕಾರಿ) ವಿಧಾನಸೌಧ ಇವರಿಂದ ಪಡೆದುಕೊಂಡು ಸೂಕ್ತ ಕ್ರಮ ಜರುಗಿಸತಕ್ಕದ್ದು.

4. ಟೆಂಡರ್ ಕವರಿನ ಮೇಲೆ "ವಿಧಾನಸೌಧ, ವಿಕಾಸಸೌಧ, ಬಹುಮಹಡಿ ಕಟ್ಟಡ ಹಾಗೂ ವಿಶ್ವೇಶ್ವರಯ್ಯ ಕೇಂದ್ರ ಕಟ್ಟಡಗಳಲ್ಲಿ, ಇಲಿ ಮತ್ತು ಕ್ರಿಮಿಕೀಟ ನಾಶಕ ವ್ಯವಸ್ಥೆ ಗುತ್ತಿಗೆ ಬಗ್ಗೆ" ಎಂದು ಬರೆದಿರತಕ್ಕದ್ದು.

5. ಟೆಂಡರ್‌ನೊಂದಿಗೆ ಇ.ಎಂ.ಡಿ. (ಠೇವಣಿ) ಮೊತ್ತ ರೂ.30,000/- ಕ್ಕೆ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು "ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ)", ಇವರ ಹೆಸರಿಗೆ ಸಲ್ಲಿಸತಕ್ಕದ್ದು. ಇ.ಎಂ.ಡಿ. ಸಂಬಂಧ ಬ್ಯಾಂಕ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ನ್ನು ತಿರಸ್ಕರಿಸಲಾಗುವುದು.

6. ಟೆಂಡರನ್ನು "ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ-1) ಕೊಠಡಿ ಸಂಖ್ಯೆ: 23, ವಿಧಾನಸೌಧ" ಇಲ್ಲಿಗೆ ಸಲ್ಲಿಸತಕ್ಕದ್ದು.

7. ತಿರಸ್ಕೃತಗೊಂಡ ಟೆಂಡರ್‌ದಾರರ "ಇ.ಎಂ.ಡಿ." ಮೊತ್ತವನ್ನು ಕೋರಿಕೆ ಸಲ್ಲಿಸಿದ ದಿನಾಂಕದಿಂದ ಒಂದು ತಿಂಗಳೊಳಗೆ ಮರುಪಾವತಿ ಮಾಡಲಾಗುವುದು.

8. ಯಶಸ್ವಿ ಟೆಂಡರುದಾರರ "ಇ.ಎಂ.ಡಿ." ಹಣವನ್ನು ಸೆಕ್ಯೂರಿಟಿ ಡಿಪಾಸಿಟ್ ಆಗಿ ಉಳಿಸಿಕೊಳ್ಳಲಾಗುವುದು. ಗುತ್ತಿಗೆ ಅವಧಿ ಮುಗಿದ ನಂತರ ಗುತ್ತಿಗೆದಾರರ ಮೇಲೆ ಯಾವುದೇ ಕ್ಲೇಮು ಬಾಕಿ ಇಲ್ಲದಿದ್ದಲ್ಲಿ, ಈ ಹಣವನ್ನು ಮರುಪಾವತಿ ಮಾಡಲಾಗುವುದು.

9. ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ: 24.04.2006ರ ಮಧ್ಯಾಹ್ನ 3.00 ಗಂಟೆಯವರೆಗೆ, ಟೆಂಡರ್ ಸಲ್ಲಿಸುವವರು ಒಂದು ವರ್ಷದ ಹಣವನ್ನು ನಮೂದಿಸತಕ್ಕದ್ದು.

10. ಟೆಂಡರನ್ನು ದಿನಾಂಕ: 24.04.2006ರ ಮಧ್ಯಾಹ್ನ 4.00 ಕ್ಕೆ ಉಪ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ), ಕೊಠಡಿ ಸಂಖ್ಯೆ: 23, ಇವರ ಕೊಠಡಿಯಲ್ಲಿ ತೆರೆಯಲಾಗುವುದು.

11. ಯಾವುದಾದರೂ ಒಂದು ಅಥವಾ ಎಲ್ಲಾ ಟೆಂಡರ್‌ಗಳನ್ನು ತಿರಸ್ಕರಿಸುವ ಅಥವಾ ಯಾವುದಾದರೊಂದನ್ನು ಒಪ್ಪಿಕೊಳ್ಳಲು ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಗಳಿಗೆ ಪೂರ್ಣ ಹಕ್ಕಿದೆ. ಇದಕ್ಕಾಗಿ ಅವರು ಯಾವುದೇ ಕಾರಣಗಳನ್ನು ನೀಡಬೇಕಾಗಿಲ್ಲ.

12. ಗುತ್ತಿಗೆಯ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ ಇ.ಎಂ.ಡಿ. ಮೊತ್ತವನ್ನು ಮುಟ್ಟುಗೋಲು ಹಾಕುವ ಹಕ್ಕು ಸರ್ಕಾರಕ್ಕೆ ಇರುತ್ತದೆ.

13. ಯಶಸ್ವಿ ಟೆಂಡರ್‌ದಾರರಿಗೆ ಗುತ್ತಿಗೆ ಹಣವನ್ನು 2 ಕಂತುಗಳಲ್ಲಿ ಬಿಡುಗಡೆ ಮಾಡಲಾಗುವುದು. ಮೊದಲನೇ ಕಂತನ್ನು ದಿನಾಂಕ 01.11.2006ರ ನಂತರ ಪಾವತಿ ಮಾಡಲಾಗುವುದು. 2ನೇ ಮತ್ತು ಅಂತಿಮ ಕಂತನ್ನು ದಿನಾಂಕ: 01.05.2007ರ ನಂತರ ಪಾವತಿ ಮಾಡಲಾಗುವುದು.

14. ಈ ಸಂಬಂಧ ಒಂದು ಕರಾರು ಪತ್ರವನ್ನು ನಿಗದಿತ ಮೊತ್ತದ ಛಾಪಾ ಕಾಗದದಲ್ಲಿ ಆ ಸಂಸ್ಥೆಯು ಜಾರಿ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ರವಿಮೂರ್ತಿ**

ಪಿ.ಆರ್.164

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1).